ತುಂಕೂರು ಸುನಂದಾ *

# ಬಸದಿಬೆಟ್ಟ - ಒಂದು ಅಧ್ಯಯನ

ಜನವಾಡಿಕೆಯ ಮಾತಲ್ಲಿ ಪ್ರಸಿದ್ಧವಾಗಿರುವ ಬಸದಿ ಬೆಟ್ಟಕ್ಕೆ ಇರುವ ಮತ್ತೊಂದು ಹೆಸರು ಮಂದರಗಿರಿ. ತುಮಕೂರಿನಿಂದ ಪೂರ್ವಕ್ಕೆ ಸುಮಾರು ಹತ್ತು ಕಿ.ಮೀ. ದೂರದಲ್ಲಿರುವ ಈ ಜೈನಕೇಂದ್ರ ಚಾರಿತ್ರಿಕವಾಗಿಯೂ ಪ್ರಸಿದ್ಧವಾಗಿದೆ. ಜೈನರ ನಂಬಿಕೆಯ ಪ್ರಕಾರ ಶ್ರೀ ಮಂದಾರಸ್ವಾಮಿ ಎಂಬ ವಿದೇಹ ತೀರ್ಥಂಕರರು ಇಲ್ಲಿ ಪಾದಸ್ಪರ್ಶ ಮಾಡಿದ್ದರಿಂದ ಆ ಹೆಸರಲ್ಲೇ 'ಮಂದರಗಿರಿ' ಎಂದು ಮತ್ತು ಇಲ್ಲಿ ಯಥೇಚ್ಛವಾಗಿ ಮಂದಾರಪುಷ್ಪಗಳು ಬಿಡುತ್ತಿದ್ದರಿಂದಲೂ ಈ ಹೆಸರು ಬಂದಿತೆಂದು ಪ್ರತೀತಿ. ಇದು ಏಕಶಿಲಾ ಬಂಡೆಯಾಗಿದ್ದು ಆಮೆಯಾಕಾರದಲ್ಲಿ ಕಾಣಬರುವುದರಿಂದಲೂ ಈ ಹೆಸರಾಯಿತ್ತು ಎಂಬ ಅಭಿಪ್ರಾಯಗಳಿವೆ.

ಇದು ಹೋಯ್ಸಳರ ಕಾಲದಲ್ಲಿ ಪ್ರಾಮುಖ್ಯತೆ ಪಡೆದಿತ್ತು ಎಂಬುದಕ್ಕೆ ಅಲ್ಲಿರುವ ಜೈನಬಸದಿಯ ಎದುರಿನಲ್ಲಿರುವ ಸುಮಾರು ೫೭ ಸಾಲಿನ ಶಾಸನ ಆಧಾರವಾಗಿದೆ. ಅಲ್ಲಿನ ಉಲ್ಲೇಖದ ಪ್ರಕಾರ ನರಸಿಂಹನ ಪ್ರತಿನಿಧಿಯಾಗಿದ್ದ ಬಾಲ ಈಶ್ವರಚಮೂಪತಿ ಎಂಬುವವನು ಈ ಪ್ರದೇಶದ ಆಡಳಿತಾಧಿಕಾರವನ್ನು ನೋಡಿಕೊಳ್ಳುತ್ತಿದ್ದನು. ಇವನಿಗೆ ಇಬ್ಬರು ಪತ್ನಿಯರು ; ಮಾಚಿಕಬ್ಬೆ ಮತ್ತು ಪದ್ಮಾವತಿ. ಪದ್ಮಾವತಿ ಜಿನಭಕ್ತಳಾಗಿದ್ದಳು. ಬೆಟ್ಟದ ಬುಡದಲ್ಲಿ ಕೆರೆಯೊಂದನ್ನು ನಿರ್ಮಿಸಿದಳು. ಅದನ್ನು ಇದೀಗ ಮೈದಾಳ ಎನ್ನುತ್ತಾರೆ. ನರುವಲಿ, ಶೀತಕಲ್, ಮಣ್ಣೆ, ಕಲ್ವಳಿ ಇವನ ಪ್ರದೇಶಕ್ಕೆ ಸೇರಿದ ಭಾಗಗಳು. ಇಲ್ಲಿನ ಜಿನದೇವಾಲಯವನ್ನು ಇವರು ನಿರ್ಮಿಸಿದರು ಎಂಬುದು ಈ ಶಾಸನದ ಮುಖ್ಯ ಪಾಠಾಂಶ.

ಈ ಏಕಶಿಲಾಬಂಡೆಯ ಮೇಲೆ ನಾಲ್ಕು ಜಿನಬಸದಿಗಳಿವೆ. ಇದರ ಸುತ್ತಲೂ ಪೌಳಿಗೋಡೆ ಮತ್ತು ದಕ್ಷಿಣ ಹಾಗೂ ಉತ್ತರಕ್ಕೆ ಮಹಾದ್ವಾರಗಳಿವೆ. ಇಲ್ಲಿರುವ ಪ್ರತಿ ಬಸದಿಗೂ ಪ್ರದಕ್ಷಿಣಾ ಪಥವಿದೆ. ನಾಲ್ಕು ಒಂದೇ ಸಾಲಿನ ನಿಟ್ಟಿನಲ್ಲಿ ಕಟ್ಟಲಾಗಿದೆ.

(ಅ) ಮೊದಲನೆಯ ಬಸದಿ ಚಂದ್ರನಾಥ ಬಸದಿ. ಇದರಲ್ಲಿ ಅಮೃತಶಿಲೆಯ ಚಂದ್ರನಾಥ ತೀರ್ಥಂಕರನ ವಿಗ್ರಹವಿದೆ. ಚಂದ್ರನ ಚಿಹ್ನೆಯಿದೆ.

(ಆ) ಎರಡನೆಯ ಬಸದಿಯಲ್ಲಿ ಸುಪಾರ್ಶ್ವನಾಥ ಸ್ವಾಮಿ ವಿಗ್ರಹ. ಇದು ಕರಿಶಿಲಾಮೂರ್ತಿ. ಸ್ವಸ್ತಿಕೆ ಚಿಹ್ನೆ ಇದೆ.

(ಇ) ಮೂರನೆಯ ಬಸದಿಯಲ್ಲಿ ಪಾರ್ಶ್ವನಾಥರ ಮೂರ್ತಿ. ಅಮೃತಶಿಲೆಯಲ್ಲಿ ಇದೆ. ಏಳು ಹೆಡೆಯ ಸರ್ಪ ಚಿಹ್ನೆ ಇದೆ.

(ಈ) ನಾಲ್ಕನೆಯ ಮಂದಿರದಲ್ಲಿ ಕರಿಶಿಲೆಯ ಸುಂದರವಾದ ನಿಲುಮೂರ್ತಿ ಚಂದ್ರನಾಥಸ್ವಾಮಿ. ಹೊಳಪುಕಲ್ಲು. ಇದರ ಎತ್ತರ ಸುಮಾರು ನಾಲ್ಕು ಅಡಿ, ಪೀಠ ಅರ್ಧ ಅಡಿ ಎತ್ತರವಿದೆ. ಪೀಠದಲ್ಲಿ ಕಮಲದಳಗಳು, ಅಕ್ಕಪಕ್ಕದಲ್ಲಿ ಯಕ್ಷ-ಯಕ್ಷಿ, ಹೂಬಳ್ಳಿಗಳನ್ನು ಬಿಡಿಸಲಾಗಿದೆ.

ಮೊದಲ ಮೂರು ಬಸದಿಯಲ್ಲಿರುವ ನವರಂಗಳಲ್ಲಿ ಸಾಧಾರಣ ಚೌಕಟ್ಟುಶೈಲಿಯ ಕಂಬಗಳಿವೆ. ನಾಲ್ಕನೆಯ ಚಂದ್ರನಾಥ ಬಸದಿಯ ನವರಂಗದ ಕಂಬಗಳು ಬಳೆಯಾಕಾರದ

* ನಂ. ೬, ೧ನೇ ರಸ್ತೆ, 'ಸಪರ್ಣಾ', ಎಂ. ಸಿ. ಕಾಲೋನಿ, ತುಮಕೂರು-೫೭೨೧೦೩

ಮತ್ತು ಚೌಕಾಕಾರದ ಕಂಬಗಳನ್ನು ಹೊಂದಿದೆ. ಇಲ್ಲಿನ ನಡುವಿನ ಮೇಲ್ಚಾವಣಿಯಲ್ಲಿ ವಿಶೇಷವಾದ ಯಕ್ಷ-ಯಕ್ಷಿ ದಂಪತಿಗಳ ಚಿತ್ರಗಳು ಮತ್ತು ಅವರುಗಳು ವಾಹನಾ ರೂಢರಾಗಿರುವ ಸನ್ನಿವೇಶದ ಚಿತ್ರಗಳವೆ. ಗಜ, ಟಗರು, ಎತ್ತು, ಮಕರ, ಅಶ್ವ, ಗರುಡ ಮುಂತಾದ ಪ್ರಾಣಿ ವಾಹನಗಳನ್ನು ಇವರು ಹೊಂದಿದ್ದಾರೆ.

ಈ ಬಸದಿಯ ಗರ್ಭಗುಡಿಯ ಮೇಲೆ ಪಿರಮಿಡ್ಡಾಕಾರದ ಮೂರು ಅಂತಸ್ತಿನ ಗೋಪುರ, ಅದರಲ್ಲಿ ಸಿಂಹ, ಪುಷ್ಪಾದಿಗಳನ್ನು ಬಿಡಿಸಿರುವರು. ಈ ಬಸದಿಯ ಮುಂದೆ ಮುರಿದುಬಿದ್ದಿರುವ ಬ್ರಹ್ಮಸ್ತಂಭವುಂಟು. ಇದರ ಬಲ ಪಾರ್ಶ್ವದಲ್ಲಿ ಶ್ರೀಮಂದಾರ ಸ್ವಾಮಿಗಳ ಪೂಜನೀಯ ಪಾದದ್ವಯದ ಸ್ಮಾರಕವಿದೆ. ಈ ದೇವಾಲಯಗಳ ಪೌಳಿಗೋಡೆಯ ಹೊರಭಾಗದಲ್ಲಿ ಉತ್ತರಭಾಗಕ್ಕೂ ಶಾಸನಬರಹವಿದೆ. ಆದರೆ ಛಿದ್ರಛಿದ್ರವಾಗಿದೆ.

ಒಟ್ಟಾರೆ : (1) ಈ ಬಸದಿಗೆ ಏರಲು ಸುಮಾರು ೪೫೦ ಮೆಟ್ಟಿಲುಗಳುಂಟು. ಅದು ಇತ್ತೀಚೆಗೆ ಕಡೆದಿರಬಹುದು.

(2) ಈ ಬೆಟ್ಟದ ಸುತ್ತಲು ತಪ್ಪಲಲ್ಲಿ ಅಲ್ಲಲ್ಲೇ ಕೆಲವು ಕಲ್ಲಿನ ತಳಪಾಯದ ಕುರುಹುಗಳಿವೆ. ಇಲ್ಲಿ ಮೈದಾಳ ಎಂಬ ಪಟ್ಟಣ ವಿದ್ದಿರಬೇಕು.

(3) ನಾಲ್ಕು ಬಸದಿಗಳಲ್ಲಿ, ಕರಿಶಿಲೆಯಲ್ಲಿರುವ (ಆ) ಸುಪಾರ್ಶ್ವನಾಥ ಮತ್ತು (ಈ) ಚಂದ್ರನಾಥ ಬಸದಿ ಹೊಯ್ಸಳರ ಕಾಲದ್ದೆಂದು ಹೇಳಬಹುದು. ಏಕೆಂದರೆ ಆ ಕಾಲಕ್ಕೆ ಅಮೃತ ಶಿಲಾಮೂರ್ತಿಗಳ ಬಳಕೆ ಅಷ್ಟಾಗಿ ಕರ್ನಾಟಕದಲ್ಲಿ ಇರಲಿಲ್ಲ. ಆದ್ದರಿಂದ ಈ ಎರಡೇ ಬಸದಿಗಳು ಮಾತ್ರ ಹೊಯ್ಸಳರ ಕಾಲದ್ದು ಎನ್ನಬಹುದು.

(4) (ಅ) ಚಂದ್ರನಾಥ (ಇ) ಪಾರ್ಶ್ವನಾಥ ಬಸದಿಗಳಲ್ಲಿರುವ ಮೂರ್ತಿಗಳು ಅಮೃತಶಿಲೆಯದ್ದಾಗಿದ್ದು ಬಹುಶಃ ಅನಂತರದ್ದು ಎಂದರೆ ೧೫-೧೬ನೇ ಶತಮಾನದ ನಂತರ ಉತ್ತರ ಭಾರತದಿಂದ ಪ್ರಭಾವಿತರಾದ ಭಕ್ತರು ಇಲ್ಲಿ ಈ ಅಮೃತ ಶಿಲಾಮೂರ್ತಿಗಳನ್ನೂ ಸ್ಥಾಪಿಸಿರಬೇಕು.

(5) ಹೊಯ್ಸಳರೇ (ಅ)ಚಂದ್ರನಾಥ (ಈ) ಚಂದ್ರನಾಥ (ಒಬ್ಬನೇ ತೀರ್ಥಂಕರರ) ಎರಡು ಬಸದಿಗಳನ್ನು ನಿರ್ಮಿಸಿದರೆಂಬುದನ್ನು ಒಪ್ಪಲಾಗುವುದಿಲ್ಲ.

(6) ಶಾಸನದಲ್ಲಿ ಹೊಯ್ಸಳರು ಇಷ್ಟೇ ಬಸದಿಗಳನ್ನು ನಿರ್ಮಿಸಿದರು ಎಂಬ ಉಲ್ಲೇಖನವೂ ಇಲ್ಲ.

(7) ಇದೀಗ ಬೆಟ್ಟದ ಉತ್ತರಕ್ಕಿರುವ 'ಮೈದಾಳ'ಕೆರೆಯಿಂದ ತುಮಕೂರು ನಗರಕ್ಕೆ ನೀರು ಸರಬರಾಜು ಅಗುತ್ತಿದೆ. ಇದನ್ನು ಚಮೂಪತಿ ಪತ್ನಿ ಪದ್ಮಾವತಿ ಎಂಬುವಳು ನಿರ್ಮಿಸಿದಳು ಆಕೆ ಪ್ರತಿನಿತ್ಯ 'ಮೈದೊಳೆದು' ಬೆಟ್ಟಕ್ಕೆ ಬಂದು ಜಿನ ಪೂಜೆಮಾಡುತ್ತಿದ್ದಳು. ಬಹುಶಃ ಕೆರೆಯಲ್ಲಿ 'ಮೈದೊಳೆದು'ಎಂಬ ಪದವೇ ರೂಪಾಂತರ ಹೊಂದಿ 'ಮೈದಾಳ'ವಾಗಿರಬೇಕೆಂಬ ಅಭಿಪ್ರಾಯ. ಈ ಪಟ್ಟಣಕ್ಕೆ 'ಮೈದೊಳಹು'ಎಂಬ ಹೆಸರು ಇತ್ತೆಂದು ಶಾಸನದಲ್ಲೂ ತಿಳಿದುಬರುತ್ತದೆ.

ಇತ್ತೀಚೆಗೆ ಬೆಟ್ಟಹತ್ತಿಹೋಗುವ ಹಾದಿಯ ಪಕ್ಕದಲ್ಲಿ ಒಂದು ಬ್ರಹ್ಮಮಂದಿರವನ್ನು ಜಿನಭಕ್ತರು ನಿರ್ಮಿಸಿದ್ದಾರೆ. ಒಟ್ಟಿನಲ್ಲಿ ಈ ಬಸದಿಬೆಟ್ಟ ಧಾರ್ಮಿಕ ಮತ್ತು ಚಾರಿತ್ರಿಕ ಪ್ರಾಮುಖ್ಯತೆಯನ್ನು ಒಂದು ಕಾಲದಲ್ಲಿ ಪಡೆದಿತ್ತು ಎಂಬುದು ನಿಸ್ಸಂದೇಹವಾಗಿ ಹೇಳಬಹುದು.